# ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1354

02. ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಕೆ. ಗೋವಿಂದ ರಾಜ್ (ವಿಧಾನ ಸಭೆಯಿಂದ ಚುನಾಯಿತರಾದವರು)

03. ಉತ್ತರಿಸುವ ದಿನಾಂಕ : 23.09.2021

04. ಉತ್ತರಿಸುವ ಸಚಿವರು. : ಮಾನ್ಯ ಗೃಹ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 03 ವರ್ಷಗಳ ಅವಧಿಯಲ್ಲಿ ರಾಜ್ಯದಲ್ಲಿ ಹೆಣ್ಣು ಮಕ್ಕಳ ಮೇಲೆ ನಡೆದಿರುವಂತಹ ಅತ್ಯಾಚಾರ ಪ್ರಕರಣಗಳ ಕುರಿತು ಸರ್ಕಾರಕ್ಕೆ ಮಾಹಿತಿ ಇದೆಯೇ; (ಹಾಗಿದ್ದಲ್ಲಿ ಜಿಲ್ಲಾವಾರು/ ವರ್ಷವಾರು ಪ್ರತ್ಯೇಕ ಮಾಹಿತಿ ಒದಗಿಸುವುದು) | ಕಳೆದ 03 ವರ್ಷಗಳ ಅವಧಿಯಲ್ಲಿ ವರದಿಯಾಗಿರುವ ಹೆಣ್ಣು ಮಕ್ಕಳ ಅತ್ಯಾಚಾರ ಪ್ರಕರಣಗಳ ಜಿಲ್ಲಾವಾರು/ವರ್ಷವಾರು ಮಾಹಿತಿಯನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ) | ಅತ್ಯಾಚಾರದಂತಹ ಪ್ರಕರಣಗಳನ್ನು ಶೀಘ್ರ ಬಗೆಹರಿಸಿ ತಪ್ಪಿತಸ್ಥರಿಗೆ ಶಿಕ್ಷೆ ವಿಧಿಸುವ ನಿಟ್ಟಿನಲ್ಲಿ ವಿಳಂಬವಾಗುತ್ತಿರುವುದನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆಯೇ; ಹಾಗಿದ್ದಲ್ಲಿ ಈ ವಿಳಂಬಕ್ಕೆ ಕಾರಣಗಳೇನು; (ಕಾರಣಗಳ ಕುರಿತಾಗಿ ಸಂಪೂರ್ಣ ಮಾಹಿತಿ ಒದಗಿಸುವುದು) | ರಾಜ್ಯದಲ್ಲಿ ಹೆಣ್ಣು ಮಕ್ಕಳ ಮೇಲ ವರದಿಯಾದ ಅತ್ಯಾಚಾರ, ಪೋಕ್ಸೋ ಪ್ರಕರಣಗಳ ತನಿಖೆಯನ್ನು ಅಪರಾಧ ಕಾನೂನು ತಿದ್ದುಪಡಿ ಸುಗ್ರೀವಾಜ್ಞೆ, 2018, ರಲ್ಲಿನ ತಿದ್ದುಪಡಿಯಂತೆ ನಿಗಧಿಪಡಿಸಿರುವ 60 ದಿನಗಳ ಕಾಲಮಿತಿಯಲ್ಲಿ ತನಿಖೆಯನ್ನು ಪೂರ್ಣಗೊಳಿಸಿ ತಪ್ಪಿತಸ್ಥರ ವಿರುದ್ಧ ದೋಷಾರೋಪಣೆಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಲು ಶ್ರಮಿಸಲಾಗುತ್ತಿದೆ. |
| ಇ) | ಕಳೆದ 05 ವರ್ಷಗಳಿಂದ ಅತ್ಯಾಚಾರವೆಸಗಿದ ಕಾಮುಕರಿಗೆ ನ್ಯಾಯಾಲಯಗಳಲ್ಲಿ ಯಾವ ಸ್ವರೂಪದ ಶಿಕ್ಷೆ ಪ್ರಕಟವಾಗಿದೆ: ಈ ನಿಟ್ಟಿನಲ್ಲಿನ ಇದುವರೆಗಿನ ಪ್ರಗತಿಯೇನು; (ಸಂಪೂರ್ಣ ಅಂಕಿ ಅಂಶಗಳ ಮಾಹಿತಿ ಒದಗಿಸುವುದು) | ಕಳೆದ 05 ವರ್ಷಗಳಲ್ಲಿ (2016, 2017, 2018, 2019, 2020, 2021-ಆಗಸ್ಟ್ 31ರವರೆಗೆ) ವರದಿಯಾದ ಪ್ರಕರಣಗಳಲ್ಲಿ ಶಿಕ್ಷೆಯನ್ನು ವಿಧಿಸಿದ ಪ್ರಕರಣಗಳ ವಿವರಗಳು ಈ ಕೆಳಕಂಡಂತಿದೆ. |

| ವರ್ಷ | ಶಿಕ್ಷೆ |
|---|---|
| 2016 | 150 |
| 2017 | 148 |

| | | | | |
|---|---|---|---|---|
| | | | 2018 | 101 |
| | | | 2019 | 42 |
| | | | 2020 | 4 |
| | | | 2021 (ಆಗಸ್ಟ್ –31) | 1 |
| ಈ) | ಸ್ತ್ರೀಯರ ಮೇಲಿನ ಲೈಂಗಿಕ ದೌರ್ಜನ್ಯವನ್ನು ಸಂಪೂರ್ಣ ನಿಗ್ರಹಿಸುವ ನಿಟ್ಟಿನಲ್ಲಿ ಸರ್ಕಾರದ ಆಲೋಚನೆ ಏನು? (ವಿವರವಾದ ಮಾಹಿತಿ ಒದಗಿಸುವುದು) | ಮಹಿಳೆಯರ ಮೇಲಿನ ಲೈಂಗಿಕ ದೌರ್ಜನ್ಯವನ್ನು ತಡೆಗಟ್ಟುವ ನಿಟ್ಟಿನಲ್ಲಿ ಸರ್ಕಾರವು ಕೈಗೊಂಡ ಕ್ರಮದ ವಿವರಗಳನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ. | | |

HD 33 SDN 2021

(ಅರಗ ಜ್ಞಾನೇಂದ್ರ)
ಗೃಹ ಸಚಿವರು

Number of Cases registered and Number of Arrested persons under POCSO-RAPE head from 2018 to 2021 (upto August)

| S N | Unit Name | 2018 | | 2019 | | 2020 | | 2021 (Upto August) | |
|---|---|---|---|---|---|---|---|---|---|
| | | No. of Cases | No. of Persons Arrested | No. of Cases | No. of Persons Arrested | No. of Cases | No. of Persons Arrested | No. of Cases | No. of Persons Arrested |
| 1 | Bagalkot | 25 | 41 | 27 | 45 | 21 | 25 | 19 | 26 |
| 2 | Ballari | 31 | 43 | 53 | 64 | 48 | 54 | 50 | 65 |
| 3 | Belagavi City | 12 | 12 | 16 | 22 | 15 | 19 | 16 | 12 |
| 4 | Belagavi Dist | 70 | 97 | 68 | 108 | 60 | 71 | 48 | 47 |
| 5 | Bengaluru City | 280 | 284 | 230 | 218 | 181 | 176 | 157 | 151 |
| 6 | Bengaluru Dist | 38 | 38 | 62 | 55 | 37 | 36 | 28 | 33 |
| 7 | Bidar | 25 | 36 | 31 | 38 | 21 | 29 | 19 | 27 |
| 8 | Chamarajanagar | 19 | 25 | 23 | 23 | 22 | 35 | 26 | 23 |
| 9 | Chickballapura | 72 | 85 | 64 | 90 | 88 | 127 | 87 | 103 |
| 10 | Chikkamagaluru | 45 | 48 | 35 | 49 | 50 | 51 | 46 | 53 |
| 11 | Chitradurga | 14 | 26 | 44 | 53 | 44 | 47 | 21 | 20 |
| 12 | Dakshina Kannada | 26 | 29 | 37 | 42 | 30 | 37 | 15 | 14 |
| 13 | Davanagere | 38 | 51 | 43 | 55 | 46 | 52 | 46 | 51 |
| 14 | Dharwad | 15 | 15 | 25 | 27 | 17 | 17 | 10 | 9 |
| 15 | Gadag | 20 | 23 | 17 | 17 | 13 | 13 | 5 | 5 |
| 16 | Hassan | 55 | 77 | 60 | 77 | 61 | 99 | 64 | 67 |
| 17 | Haveri | 45 | 66 | 36 | 42 | 47 | 55 | 40 | 39 |
| 18 | Hubballi Dharwad City | 13 | 19 | 15 | 15 | 19 | 17 | 9 | 9 |
| 19 | K.G.F | 13 | 21 | 21 | 31 | 18 | 22 | 10 | 10 |
| 20 | Kalaburagi | 32 | 38 | 45 | 48 | 44 | 53 | 23 | 27 |
| 21 | Kalaburagi City | 8 | 8 | 6 | 11 | 7 | 8 | 13 | 2 |
| 22 | Karnataka Railways | 1 | 1 | 0 | 0 | 2 | 2 | 1 | 1 |
| 23 | Kodagu | 25 | 20 | 46 | 51 | 61 | 68 | 31 | 23 |
| 24 | Kolar | 37 | 59 | 34 | 44 | 36 | 41 | 32 | 35 |
| 25 | Koppal | 30 | 37 | 31 | 35 | 48 | 48 | 17 | 16 |
| 26 | Mandya | 38 | 52 | 45 | 79 | 56 | 82 | 30 | 30 |
| 27 | Mangaluru City | 24 | 32 | 25 | 39 | 22 | 19 | 17 | 13 |
| 28 | Mysuru City | 24 | 27 | 27 | 38 | 28 | 40 | 21 | 28 |
| 29 | Mysuru Dist | 40 | 28 | 51 | 43 | 41 | 36 | 35 | 27 |
| 30 | Raichur | 27 | 29 | 34 | 42 | 35 | 54 | 31 | 34 |
| 31 | Ramanagara | 16 | 21 | 49 | 45 | 39 | 41 | 37 | 28 |
| 32 | Shivamogga | 75 | 86 | 90 | 104 | 98 | 115 | 54 | 61 |
| 33 | Tumakuru | 29 | 32 | 48 | 68 | 34 | 46 | 29 | 52 |
| 34 | Udupi | 50 | 58 | 39 | 48 | 35 | 42 | 26 | 30 |
| 35 | Uttara Kannada | 24 | 24 | 36 | 44 | 41 | 36 | 23 | 25 |
| 36 | Vijayapur | 29 | 43 | 30 | 48 | 39 | 54 | 16 | 22 |
| 37 | Yadgir | 11 | 17 | 24 | 30 | 21 | 32 | 21 | 31 |
| | TOTAL | 1376 | 1648 | 1567 | 1888 | 1525 | 1799 | 1173 | 1249 |

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಕೆ.ಗೋವಿಂದ ರಾಜ್(ವಿಧಾನ ಸಭೆಯಿಂದ ಚುನಾಯಿತರಾದವರು) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1354ಕ್ಕೆ ಅನುಬಂಧ -2**

**ಮಕ್ಕಳ ಮತ್ತು ಮಹಿಳೆಯರ ಮೇಲಿನ ಅತ್ಯಾಚಾರ ಮತ್ತು ಲೈಂಗಿಕ ದೌರ್ಜನ್ಯ ಪ್ರಕರಣಗಳನ್ನು ತಡೆಗಟ್ಟುವ ಸಂಬಂಧ ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.**

- ಅತ್ಯಾಚಾರ, ಪೋಕ್ಸೋ ಪ್ರಕರಣಗಳ ತನಿಖೆಯನ್ನು ಅಪರಾಧ ಕಾನೂನು ತಿದ್ದುಪಡಿ ಸುಗ್ರೀವಾಜ್ಞೆ, 2018 ರಲ್ಲಿನ ತಿದ್ದುಪಡಿಯಂತೆ ನಿಗಧಿಪಡಿಸಿರುವ 60 ದಿನಗಳ ಕಾಲಮಿತಿಯಲ್ಲಿ ತನಿಖೆಯನ್ನು ಪೂರ್ಣಗೊಳಿಸಲು ರಾಜ್ಯದ ಎಲ್ಲಾ ಘಟಕಾಧಿಕಾರಿಗಳಿಗೆ ಸೂತ್ತೋಲೆಯ ಮೂಲಕ ನಿರ್ದೇಶನಗಳನ್ನು ನೀಡಲಾಗಿರುತ್ತದೆ.
- ಮಹಿಳೆಯರ ಮೇಲಿನ ಲೈಂಗಿಕ ದೌರ್ಜನ್ಯ ಪ್ರಕರಣಗಳ ಕುರಿತು ತನಿಖೆಯಲ್ಲಿ ಉಪಯೋಗವಾಗುವ ಅಂಶಗಳಿಗೆ ಸಂಬಂಧಿಸಿದಂತೆ ನಿರ್ಧಿಷ್ಟ ಕಾರ್ಯ ವಿಧಾನವನ್ನು (ಎಸ್.ಓ.ಪಿ) ಸಿದ್ದಪಡಿಸಿ, ಎಲ್ಲಾ ಘಟಕಾಧಿಕಾರಿಗಳಿಗೆ ಕಳುಹಿಸಲಾಗಿರುತ್ತದೆ.
- ಮಹಿಳೆಯರು ಮತ್ತು ಮಕ್ಕಳ ಮೇಲಿನ ದೌರ್ಜನ್ಯವನ್ನು ತಡೆಗಟ್ಟುವ ನಿಟ್ಟಿನಲ್ಲಿ 2019-20ನೇ ಸಾಲಿನಲ್ಲಿ ರೂ 700 ಲಕ್ಷಗಳ ಅನುದಾನವನ್ನು ನಿರ್ಭಯ ಯೋಜನೆ ಅಡಿಯಲ್ಲಿ ಬಿಡುಗಡೆ ಮಾಡಿದ್ದು, ಸದರಿ ಅನುದಾನದಲ್ಲಿ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಮೊದಲ ಹಂತದಲ್ಲಿ 700 ಪೊಲೀಸ್ ಠಾಣೆಗಳಲ್ಲಿ ಹೆಲ್ಪ್ ಡೆಸ್ಕ್ ಸ್ಥಾಪಿಸಲಾಗಿದೆ. ಎರಡನೇ ಹಂತದಲ್ಲಿ 2020-21ನೇ ಸಾಲಿಗೆ ರೂ 100 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಸದರಿ ಅನುದಾನದಲ್ಲಿ ಬೆಂಗಳೂರು ನಗರದ 100 ಪೊಲೀಸ್ ಠಾಣೆಗಳಲ್ಲಿ ಮಹಿಳೆ ಹೆಲ್ಪ್ ಡೆಸ್ಕ್‌ಗಳನ್ನು ಸ್ಥಾಪಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.
- ಮಹಿಳೆಯರು ಮತ್ತು ಮಕ್ಕಳ ಮೇಲಿನ ದೌರ್ಜನ್ಯವನ್ನು ತಡೆಗಟ್ಟುವ ನಿಟ್ಟಿನಲ್ಲಿ 2019-20ನೇ ಸಾಲಿನಲ್ಲಿ ರೂ 3.88 ಕೋಟಿ ಅನುದಾನವನ್ನು ನಿರ್ಭಯ ಯೋಜನೆ ಅಡಿಯಲಿ ಬಿಡುಗಡೆ ಮಾಡಿದ್ದು, ಸದರಿ ಅನುದಾನದಲ್ಲಿ ರಾಜ್ಯದ 30 ಮಹಿಳಾ ಪೊಲೀಸ್ ಠಾಣೆಗಳಲ್ಲಿ ಮಾನವ ಕಳ್ಳಸಾಗಾಣಿಕೆ ನಿಷೇಧ ಘಟಕಗಳನ್ನು ಸ್ಥಾಪಿಸಲಾಗಿದೆ. 2020-21ನೇ ಸಾಲಿಗೆ ರೂ 37.90 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಸದರಿ ಅನುದಾನದಲ್ಲಿ 5 ಮಹಿಳಾ ಪೊಲೀಸ್ ಠಾಣೆಗಳಲ್ಲಿ ಮಾನವ ಕಳ್ಳಸಾಗಾಣಿಕೆ ನಿಷೇಧ ಘಟಕಗಳನ್ನು ಸ್ಥಾಪಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.
- ಮಕ್ಕಳ ಮೇಲಿನ ದೌರ್ಜನ್ಯ ಪ್ರಕರಣಗಳ ತ್ವರಿತ ಇತ್ಯರ್ಥಕ್ಕಾಗಿ ಸರ್ಕಾರವು, ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಪ್ರತ್ಯೇಕ ಮಕ್ಕಳ ನ್ಯಾಯಾಲಯಗಳನ್ನು (Children's Courts) ಸ್ಥಾಪಿಸಿರುತ್ತದೆ. ಹಾಗೆಯೇ ವಾದ ಮಂಡಿಸಲು ಸರ್ಕಾರಿ ಅಭಿಯೋಜಕರನ್ನು ಸಹ ನೇಮಿಸಲಾಗಿರುತ್ತದೆ.
- ಸರ್ಕಾರಿ ಆದೇಶ ಸಂಖ್ಯೆ: ಹೆಚ್.ಡಿ. 20 ಪಿಸಿಸಿ 2021, ದಿನಾಂಕ 29/6/2021 ರಲ್ಲಿ ಮಕ್ಕಳ ರಕ್ಷಣೆಗಾಗಿ ಜೆ.ಜೆ. ಕಾಯ್ದೆ ಅಡಿ (ಕಾನೂನು ಸಂಘರ್ಷಕ್ಕೆ ಒಳಪಟ್ಟ ಮಕ್ಕಳು) ರಾಜ್ಯದ ನಗರ ಹಾಗೂ ಜಿಲ್ಲೆಗಳಲ್ಲಿ ಜೆ.ಜೆ. ಘಟಕಗಳನ್ನು ಸ್ಥಾಪಿಸಲಾಗಿದೆ.
- ಬೆಂಗಳೂರು ನಗರದಲ್ಲಿ ಮಹಿಳೆಯರ ರಕ್ಷಣೆಗಾಗಿ, ಮಹಿಳಾ ಸಹಾಯವಾಣಿ 1091, 22943225 ಕಾರ್ಯ ನಿರ್ವಹಿಸುತ್ತಿದ್ದು, ಸ್ಪಂದನ ಸಹಾಯವಾಣಿಯನ್ನು ಸಹ ಸ್ಥಾಪಿಸಿ ಕಾರ್ಯನಿರ್ವಹಿಸಲಾಗುತ್ತಿದೆ.
- ದಿನದ 24 ಗಂಟೆಯೂ ಸಹ ಮಹಿಳೆಯರ ಮತ್ತು ಮಕ್ಕಳ ಸುರಕ್ಷತೆಗಾಗಿ "ಪಿಂಕ್ ಹೊಯ್ಸಳ" ಮತ್ತು 112 ಗಸ್ತುವಾಹನ ಗಸ್ತು ಕಾರ್ಯ ನಿರ್ವಹಿಸುತ್ತಿವೆ.

- ಅತ್ಯಾಚಾರಕ್ಕೆ ಒಳಗಾಗಿ ನೊಂದವರಿಗೆ ಸಂತ್ರಸ್ಥರ ಪರಿಹಾರ ಯೋಜನೆಯಡಿ ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ. 1 ಪಿಸಿಬಿ 2011, ದಿನಾಂಕ 31.03.2015 ರಂತೆ ಪರಿಹಾರ ಧನ ವಿತರಿಸಲಾಗುತ್ತಿದ್ದು, ಸದರಿ ಪರಿಹಾರ ಮೊತ್ತವನ್ನು ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 42 ಪಿಸಿಬಿ 2018, ದಿನಾಂಕ.25.09.2018ರಲ್ಲಿ ಪರಿಷ್ಕರಿಸಿ ಹೆಚ್ಚಿಸಲಾಗಿದೆ. ಸದರಿ ಆದೇಶದಲ್ಲಿ ಸಾಮೂಹಿಕ ಅತ್ಯಾಚಾರ ಪ್ರಕರಣದ ಸಂತ್ರಸ್ಥರಿಗೆ ಕನಿಷ್ಠ ಪರಿಹಾರ ಮೊತ್ತವನ್ನು 5 ಲಕ್ಷ ಹಾಗೂ ಗರಿಷ್ಠ 10 ಲಕ್ಷ ಗಳಿಗೆ ಹಾಗೂ ಅತ್ಯಾಚಾರ ಪ್ರಕರಣದಲ್ಲಿ ಕನಿಷ್ಠ ಪರಿಹಾರ ಮೊತ್ತವನ್ನು 4 ಲಕ್ಷ ಹಾಗೂ ಗರಿಷ್ಠ 7 ಲಕ್ಷ ಗಳಿಗೆ ಮತ್ತು ಆಸಿಡ್ ದಾಳಿಗೊಳಗಾದ ಸಂತ್ರಸ್ಥರಿಗೆ ಕನಿಷ್ಠ 7 ಲಕ್ಷ ಹಾಗೂ ಗರಿಷ್ಠ 8 ಲಕ್ಷಗಳನ್ನು ನಿಗಧಿಗೊಳಿಸಿ ಆದೇಶಿಸಲಾಗಿದೆ.
- ರಾಜ್ಯದ ಇತರೆ ಜಿಲ್ಲೆಗಳಾದ ಬಾಗಲಕೋಟೆ ಜಿಲ್ಲೆಯಲ್ಲಿ ಚನ್ನಮ್ಮ ಪಡೆ, ಬಳ್ಳಾರಿ ಜಿಲ್ಲೆಯಲ್ಲಿ ಓಬವ್ವ ಪಡೆ, ದಾವಣಗೆರೆ ಜಿಲ್ಲೆಯಲ್ಲಿ ದುರ್ಗಾ ಪಡೆ, ಗದಗ ಜಿಲ್ಲೆಯಲ್ಲಿ ಚನ್ನಮ್ಮ ಪಡೆ, ಉತ್ತರ ಕನ್ನಡ ಜಿಲ್ಲೆಯಲ್ಲಿ ಶರಾವತಿ ಓಬವ್ವ ಪಡೆ, ಬೀದರ್ ಜಿಲ್ಲೆಯಲ್ಲಿ ರಾಣಿ ಚನ್ನಮ್ಮ ವಾಹನವು ಹೆಚ್ಚಾಗಿ ಮಹಿಳೆಯರು ಓಡಾಡುವ ಜನನಿಬಿಡ ಸ್ಥಳಗಳಲ್ಲಿ ಹಾಗೂ ಶಾಲಾ ಕಾಲೇಜುಗಳ ಬಳಿ ಹೆಚ್ಚಿನ ಗಸ್ತು ಕಾರ್ಯವನ್ನು ನಿರ್ವಹಿಸುತ್ತಿರುತ್ತದೆ.
- ಮಹಿಳೆಯರು ಕರ್ತವ್ಯ ನಿರ್ವಹಿಸುವ ಎಲ್ಲಾ ಕಛೇರಿಗಳು, ಸಂಸ್ಥೆಗಳು, ಕಾರ್ಖಾನೆಗಳಲ್ಲಿ ವಿಶೇಷವಾಗಿ ಸುರಕ್ಷತೆಯ ಬಗ್ಗೆ ಮಹಿಳಾ ಸೆಕ್ಯೂರಿಟಿಗಳನ್ನು ನಿಯೋಜಿಸುವಂತೆ ಸೂಚಿಸಲಾಗಿದೆ.
- ಮಹಿಳೆಯರ ಮೇಲಿನ ದೌರ್ಜನ್ಯ ಪ್ರಕರಣಗಳಲ್ಲಿ ಭಾಗಿಯಾದ ಆರೋಪಿಗಳನ್ನು ಶೀಘ್ರವಾಗಿ ಬಂಧಿಸಿ ಆರೋಪಿಗಳ ವಿರುದ್ಧ ಮಾನ್ಯ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿ ಸಲ್ಲಿಸಲಾಗುತ್ತಿದೆ.
- ಹಗಲು ಮತ್ತು ರಾತ್ರಿ ವೇಳೆಯಲ್ಲಿ ಕೆಲಸಕ್ಕೆ ಹೋಗುವ ಮಹಿಳೆಯರ ಸುರಕ್ಷತೆಗೆ ಸಕಲ ಮುನ್ನೆಚ್ಚರಿಕೆ ವಹಿಸುವಂತೆ ಸಂಬಂಧಪಟ್ಟ ಕಂಪನಿಗಳು, ಕಾಲ್ ಸೆಂಟರ್‌ಗಳ, ಪಿಜಿ ಸೆಂಟರ್‌ಗಳ ಮಾಲೀಕರಿಗೆ/ವ್ಯವಸ್ಥಾಪಕರಿಗೆ ಸಲಹೆ, ಸೂಚನೆಗಳನ್ನು ನೀಡಲಾಗುತ್ತಿದೆ.
- ಮಹಿಳೆಯರು ಓಡಾಡುವ ಸ್ಥಳಗಳ ಬಳಿ, ಬಸ್ ನಿಲ್ದಾಣದಲ್ಲಿ, ಶಾಲಾ ಕಾಲೇಜುಗಳ ಬಳಿ ಸಿಬ್ಬಂದಿಗಳನ್ನು ಪಾಯಿಂಟ್ ಕರ್ತವ್ಯಕ್ಕೆ ನೇಮಕ ಮಾಡಲಾಗುತ್ತಿದ್ದು, ಸದರಿ ಸ್ಥಳಗಳ ಬಳಿ ಹೊಯ್ಸಳ ಹಾಗೂ ಚೀತಾ ವಾಹನಗಳನ್ನು ಗಸ್ತು ಮಾಡಿ ಇಂತಹ ಕೃತ್ಯಗಳು ನಡೆಯದಂತೆ ಸೂಕ್ತ ಮುನ್ನೆಚ್ಚರಿಕೆಯನ್ನು ಕೈಗೊಳ್ಳಲಾಗಿದೆ.
- ಮಹಿಳೆಯರ ಸರಗಳ್ಳತನ ತಡೆಗಟ್ಟುವ ಸಲುವಾಗಿ, ಅರಿವು ಮೂಡಿಸುವ ಕಾರ್ಯಕ್ರಮ ನಡೆಸಲಾಗುತ್ತಿದ್ದು, ಮುಂಜಾಗ್ರತಾ ಕ್ರಮವಾಗಿ, ಪ್ರಮುಖ ಸ್ಥಳಗಳಲ್ಲಿ ಸಿ.ಸಿ.ಟಿ.ವಿ. ಕ್ಯಾಮೆರಾಗಳನ್ನು ಅಳವಡಿಸಲಾಗುತ್ತಿದೆ ಹಾಗೂ ಈ ಸಂಬಂಧ ಕರಪತ್ರ ಮತ್ತು ಪೋಸ್ಟರ್‌ಗಳ ಮೂಲಕ ಮಹಿಳೆಯರಲ್ಲಿ ಜಾಗೃತಿ ಮೂಡಿಸಲಾಗುತ್ತಿದೆ.
- ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಕೆಲಸ ಮಾಡುವ ಕಛೇರಿಗಳಲ್ಲಿ ಆಂತರಿಕ ದೂರು ನಿರ್ವಹಣಾ ಸಮಿತಿಯನ್ನು ರಚಿಸಲಾಗಿರುತ್ತದೆ.
- ಸಂಕಷ್ಟದಲ್ಲಿರುವ/ತೊಂದರೆಯಲ್ಲಿರುವ ಮಹಿಳೆಯರ ಸಹಾಯ ಹಾಗೂ ಸುರಕ್ಷತೆಗಾಗಿ ಮಹಿಳಾ ಸುರಕ್ಷಾ ಆ್ಯಪ್ ಅನ್ನು ಪರಿಚಯಿಸಲಾಗಿದೆ. ಈ ಮಹಿಳಾ ಸುರಕ್ಷಾ ಆ್ಯಪ್ ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿದೆ.

- ಸದರಿ ವಿಶೇಷ ಪಡೆಗಳಲ್ಲಿ ವಿಶೇಷವಾಗಿ ಮಹಿಳಾ ಪೊಲೀಸ್ ಸಿಬ್ಬಂದಿಗಳನ್ನು ನಿಯೋಜಿಸಿದ್ದು ಅವರುಗಳಿಂದ ಎಲ್ಲಾ ಶಾಲಾ/ಕಾಲೇಜುಗಳ ಹತ್ತಿರ ಮತ್ತು ಮಹಿಳೆಯರು & ಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿ ಸೇರುವ ಪ್ರದೇಶಗಳು ಹಾಗೂ ಜನನಿಬಿಡ ಸ್ಥಳಗಳಲ್ಲಿ ವಿಶೇಷ ಗಸ್ತು ಕಾರ್ಯವನ್ನು ಕೈಗೊಳ್ಳಲಾಗುತ್ತಿದೆ.
- ಸದರಿ ಸಿಬ್ಬಂದಿಯವರು ತೆರೆದ ಮನೆ ಯೋಜನೆಯ ಮೂಲಕ ಮಕ್ಕಳಿಗಾಗಿ ಹಾಗೂ ಜನ ಸಂಪರ್ಕ ಸಭೆಯ ಮೂಲಕ ಮಹಿಳೆಯರಿಗೆ ಸ್ವಯಂ ರಕ್ಷಣೆಯ ಬಗ್ಗೆ ಕರಾಟೆ ಮತ್ತು ಕೆಲವು ಕೌಶಲ್ಯಗಳ ಬಗ್ಗೆ ಪ್ರಾತ್ಯಕ್ಷಿಕೆಯ ಮೂಲಕ ಜಾಗೃತಿ ಮೂಡಿಸಲಾಗುತ್ತಿರುತ್ತದೆ.
- ಮಹಿಳೆಯರು ಮತ್ತು ಹೆಣ್ಣು ಮಕ್ಕಳ ಮೇಲೆ ನಡೆಯುತ್ತಿರುವ ದೌರ್ಜನ್ಯಗಳನ್ನು ಹತ್ತಿಕ್ಕುವ ನಿಟ್ಟಿನಲ್ಲಿ ಬೆಂಗಳೂರು ನಗರದಲ್ಲಿ "ವೀರವನಿತೆ" ತಂಡವನ್ನು ರಚಿಸಿ, ಸದರಿಯವರಿಗೆ 6 ತಿಂಗಳು ನುರಿತ ತಜ್ಞರಲ್ಲಿ ಸ್ವಯಂ ರಕ್ಷಣೆ ಮತ್ತು ಮಾರ್ಷಿಯಲ್ ಆರ್ಟ್ಸ್ ಬಗ್ಗೆ ತರಬೇತಿ ನೀಡಿ, ನಂತರ ಸದರಿ ಯವರುಗಳನ್ನು 3 ತಂಡಗಳನ್ನಾಗಿ ರಚಿಸಿ ಮೇಲಾಧಿಕಾರಿಗಳ ನೇತೃತ್ವದಲ್ಲಿ ನಗರದ ವಿವಿಧ ಶಾಲಾ-ಕಾಲೇಜುಗಳು ಮತ್ತು ಮಹಿಳೆಯರು ಹೆಚ್ಚಾಗಿ ಕೆಲಸ ನಿರ್ವಹಿಸುವ ಗಾರ್ಮೆಂಟ್ಸ್‌ಗಳು, ಮಾಲ್ ಮತ್ತಿತರ ಕಡೆಗಳಲ್ಲಿ ಸದರಿಯವರುಗಳಿಗೆ ಸ್ವಯಂ ರಕ್ಷಣೆಯ ಬಗ್ಗೆ ಮಾಹಿತಿ ಹಾಗೂ ತರಬೇತಿಗಳನ್ನು ನೀಡಲಾಗಿರುತ್ತದೆ.
- ಕಾಣೆಯಾದ ಪ್ರಕರಣಗಳ ಮಾಹಿತಿಯನ್ನು ಕೇಂದ್ರ ಸರ್ಕಾರದ ಮಿಸ್ಸಿಂಗ್ ಟ್ರಾಕ್ ಚೈಲ್ಡ್ ಪೋರ್ಟಲ್‌ನಲ್ಲಿ ಅಪ್‌ಲೋಡ್ ಮಾಡಲಾಗುತ್ತಿದೆ. ಆ ಮೂಲಕ ಅಂತರ್‌ರಾಜ್ಯ ಕಾಣೆ ಪ್ರಕರಣಗಳ ಮಾಹಿತಿಯನ್ನು ಪಡೆಯಬಹುದಾಗಿರುತ್ತದೆ.
- ಕಾಣೆಯಾದ ಪ್ರಕರಣಗಳಲ್ಲಿ ತನಿಖೆ ಮತ್ತು ಪತ್ತೆ ಕಾರ್ಯವನ್ನು ಸಮರ್ಪಕವಾಗಿ ಹಾಗೂ ವ್ಯವಸ್ಥಿತವಾಗಿ ಕೈಗೊಳ್ಳಲು ಅನುವಾಗುವಂತೆ ನಿರ್ಧಿಷ್ಟ ಕಾರ್ಯ ವಿಧಾನ (ಎಸ್‌ಓಪಿ) ಅನ್ನು ಸಿದ್ದಪಡಿಸಿ ರಾಜ್ಯದ ಎಲ್ಲಾ ಘಟಕಾಧಿಕಾರಿಗಳಿಗೆ ಕಳುಹಿಸಲಾಗಿರುತ್ತದೆ.
- ನಾಲ್ಕು ತಿಂಗಳಿಗೂ ಮೇಲ್ಪಟ್ಟು ಪತ್ತೆಯಾಗದ ಮಕ್ಕಳ ಕಾಣೆ ಪ್ರಕರಣಗಳನ್ನು ಮಾನವ ಕಳ್ಳ ಸಾಗಣೆ ನಿಗ್ರಹ ಘಟಕ ಪೊಲೀಸ್ ಠಾಣೆಗಳಿಗೆ ತನಿಖೆಗಾಗಿ ವರ್ಗಾಯಿಸಲು ಘಟಕಾಧಿಕಾರಿಗಳಿಗೆ ನಿರ್ದೇಶಿಸಲಾಗಿರುತ್ತದೆ.
- ಮಾನವ ಕಳ್ಳಸಾಗಾಣಿಕೆಯ ಪ್ರಕರಣಗಳ ತನಿಖೆಯನ್ನು ಸಮರ್ಥವಾಗಿ ನಿರ್ವಹಿಸಲು ತನಿಖಾಧಿಕಾರಿಗಳಿಗಾಗಿ ನಿರ್ಧಿಷ್ಟ ಕಾರ್ಯವಿಧಾನವನ್ನು ಸಿದ್ದಪಡಿಸಿ, ಸ್ಥಾಯಿ ಆದೇಶದ ಮೂಲಕ ರಾಜ್ಯ ಎಲ್ಲಾ ಘಟಕಾಧಿಕಾರಿಗಳಿಗೆ ಕಳುಹಿಸಿಕೊಡಲಾಗಿದೆ.
- ಅಪರಿಚಿತ ವ್ಯಕ್ತಿಗಳ ಬಳಿ ಸಂಪರ್ಕ ಇಟ್ಟುಕೊಳ್ಳದಂತೆ, ಆಸೆ ಆಮಿಷಗಳನ್ನು ಒಡ್ಡುವ ಆಸಾಮಿಗಳ ಬಗ್ಗೆ ಮಹಿಳೆಯರಿಗೆ & ಮಕ್ಕಳಿಗೆ ಹಾಗೂ ಗ್ರಾಮಗಳಲ್ಲಿ ಸೂಕ್ತ ತಿಳುವಳಿಕೆಗಳನ್ನು ನೀಡಲಾಗಿರುತ್ತದೆ.
- ಚಾಲ್ತಿಯಲ್ಲಿರುವ ಸಾಮಾಜಿಕ ಜಾಲತಾಣಗಳಾದ ಬ್ಲಾಗ್, ಟ್ವಿಟರ್, ಫೇಸ್ ಬುಕ್, ಪೊಲೀಸ್ ವೆಬ್ ಸೈಟ್ ಹಾಗೂ ಇತರೆ ಜಾಲತಾಣಗಳ ಮೂಲಕ ಮಾನವ ಕಳ್ಳ ಸಾಗಾಣೆ ಬಗ್ಗೆ ಜಾಗೃತಿ ಮೂಡಿಸುವ ಸಂದೇಶವನ್ನು ಪ್ರಕಟಿಸಲಾಗಿದೆ.
- ಮಾಸಿಕ ಅಪರಾಧ ಪರಾಮರ್ಶೆ ಸಭೆಗಳಲ್ಲಿ ಸಂಬಂಧಿಸಿದ ಪೊಲೀಸ್ ಅಧೀಕ್ಷಕರು/ ಉಪ ಪೊಲೀಸ್ ಆಯುಕ್ತರು ಬಾಕಿಯಿರುವ ಕಾಣೆ ಪ್ರಕರಣಗಳನ್ನು ಪರಿಶೀಲಿಸಲು ನಿರ್ದೇಶಿಸಲಾಗಿದ್ದು, ಈ ಕುರಿತು ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ.

***